ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 20 ನೇ ಮಾರ್ಚ್, 2020

ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಬಗ್ಗೆ

ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ(ಶಿಕ್ಷಕರ ಕ್ಷೇತ್ರ):-

1336 (1597) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ವಿದ್ಯಾರ್ಥಿ ಪಾಸುಗಳು, ಅಂಗವಿಕಲರ, ಅಂಧರ, ಸ್ವಾತಂತ್ರ್ಯ ಹೋರಾಟಗಾರರ, ಹುತಾತ್ಮ ಯೋಧರ, ಗೋವಾ ವಿಮೋಚನಾ ಚಳುವಳಿಗಾರರ, ಎಂಡೋಸಲ್ಫಾನ್ ಪೀಡಿತರ, ಹಿರಿಯ ನಾಗರಿಕರಿಗೆ ರಿಯಾಯಿತಿ ದರದಲ್ಲಿ ಪಾಸುಗಳನ್ನು ವಿತರಿಸಿದ್ದಕ್ಕೆ ಸರ್ಕಾರದಿಂದ ಎಷ್ಟು ಹಣ ಸಂಸ್ಥೆಗೆ ಬಾಕಿ ಬರಬೇಕಾಗಿದೆ ;

(ಆ) ಈ ಬಾಕಿ ಹಣವನ್ನು ಇಲ್ಲಿಯವರೆಗೂ ಸರ್ಕಾರ ಸಂಸ್ಥೆಗೆ ನೀಡದೇ ಬಾಕಿ ಉಳಿಸಿಕೊಂಡಿರುವುದಕ್ಕೆ ಕಾರಣವೇನು ; ಈ ರೀತಿ ಬಾಕಿ ಹಣವನ್ನು ಕೊಡದೇ ಇರುವುದರಿಂದ ವಾ.ಕ.ರ.ಸಾ.ಸ ನಡೆಸಲು ತೊಂದರೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ತೆಗೆದುಕೊಂಡ ಕ್ರಮಗಳೇನು ;

(ಇ) ಕೂಡಲೇ ಸರ್ಕಾರ ವಾ.ಕ.ರ.ಸಾ.ಸ ಬಾಕಿ ನೀಡಬೇಕಾದ ಹಣವನ್ನು ನೀಡಿ ಸಂಸ್ಥೆಯನ್ನು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಕ್ರಮ ಕೈಗೊಳ್ಳುವುದೇ ;

(ಈ) ಬಿ.ಎಂ.ಟಿ.ಸಿ.ಯವರಿಗೆ ಮೋಟಾರ್ ವಾಹನ ತೆರಿಗೆ ವಿನಾಯಿತಿ ನೀಡಿದ್ದು ನಿಜವೇ ; ನಿಜವಿದ್ದಲ್ಲಿ, ಯಾವ ದಿನಾಂಕದಿಂದ ನೀಡಲಾಗಿದೆ ;

(ಉ) ಸದರಿ ವ್ಯವಸ್ಥೆಯನ್ನು ವಾ.ಕ.ರ.ಸಾ. ಸಂಸ್ಥೆಗೆ ವಿಸ್ತರಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ ?